ಡಾ॥ ಕೆ. ಜಿ. ವಸಂತಮಾಧವ

# ಕರಾವಳಿ ಕರ್ನಾಟಕದ ಕೆಲವು ಅಪರೂಪ ದಾಖಲೆಪತ್ರಗಳು

ದಾಖಲೆಪತ್ರಗಳು ಆಧುನಿಕ ಇತಿಹಾಸದ ಪ್ರಮುಖ ಆಕರಗಳಾಗಿವೆ. ಇಂತಹ ದಾಖಲೆಪತ್ರಗಳು ಕರ್ನಾಟಕ ಕರಾವಳಿಯ ಪ್ರಾಚೀನ ದೇವಾಲಯಗಳಲ್ಲೂ ಮಠಗಳಲ್ಲೂ ಕುಲೀನ ಜಮೀನ್ದಾರ ಮನೆಗಳಲ್ಲೂ ಅಸಂಖ್ಯವಿವೆ. ಆದರೆ ಇವುಗಳ ಕ್ರೋಢೀಕರಣ ಇನ್ನೂ ನಡೆಯಬೇಕಾಗಿದೆ. ಇಷ್ಟಲ್ಲದೇ ಶೃಂಗೇರಿ ಮಠದಲ್ಲಿ ಕರ್ನಾಟಕ ಕರಾವಳಿಯ ಇತಿಹಾಸಕ್ಕೆ ಸಂಬಂಧಪಟ್ಟ ಹಲವಾರು ದಾಖಲೆಗಳನ್ನು ಡಾ॥ ಎ. ಕೆ. ಶಾಸ್ತ್ರಿಯವರು ಪತ್ತೆಹಚ್ಚಿದ್ದಾರೆ. ಮದ್ರಾಸು ಓರಿಯಂಟಲ್ ಗ್ರಂಥಾಲಯ, ಕೊಚ್ಚಿ ಪತ್ರಾಗಾರ ಮತ್ತು ಗೋವೆ ರಾಜ್ಯದ ಪತ್ರಾಗಾರದಲ್ಲೂ ಕನ್ನಡ ಕರಾವಳಿಯ ಇತಿಹಾಸ ತಿಳಿಸುವ ಅಪೂರ್ವ ದಾಖಲೆಪತ್ರಗಳಿವೆ. ಈ ಅಪೂರ್ವ ದಾಖಲೆಪತ್ರಗಳನ್ನು ಕಡತ ಮತ್ತು ಪತ್ರಗಳೆಂದು ಸಾಮಾನ್ಯವಾಗಿ ವರ್ಗೀಕರಿಸಬಹುದು. ಕಪ್ಪುಬಟ್ಟೆಯ ಮೇಲೆ ಬಳಪಕಲ್ಲಿನಿಂದ ಬರೆದ ಬರಹಗಳೇ ಕಡತ. ಇದನ್ನು ಬಿಸಣಿಗೆಯಂತೆ ಎಡಕೊಮ್ಮೆ ಮತ್ತು ಬಲಕೊಮ್ಮೆ ಮಡಚಿ ಪುಸ್ತಕದಂತೆ ಇಡಬಹುದು. ರಕ್ಷಣೆಗಾಗಿ ಇದರ ಮೇಲೆ ಮರದ ತೆಳ್ಳಗಿನ ಪಟ್ಟಿ ಇಟ್ಟಿರುತ್ತಾರೆ. ಈ ಕಡತಗಳಲ್ಲಿ ಬಿನ್ನವತ್ತಳೆಗಳು, ನಿರೂಪ ಒಂದು ವರ್ಗಕ್ಕೆ ಸೇರಿದರೆ ಲೆಖ್ಖಪತ್ರಗಳಿಗೆ ಸಂಬಂಧಿಸಿದವುಗಳು ಇನ್ನೊಂದು ಮಾದರಿಯವು.[1]

ಇಂತಹ ಕಡತಗಳು ಮಂಜೇಶ್ವರ, ಕೋಟೇಶ್ವರ ಮತ್ತು ಕೊಲ್ಲೂರು ದೇವಾಲಯಗಳಲ್ಲೂ ಮತ್ತು ಹಲಸನಾಡ ವಿಶ್ವೇಶ್ವರಯ್ಯ ಎಂಬ ಜಮೀನ್ದಾರರ ಮನೆಯಲ್ಲೂ ಬಹಳ ಇವೆ. ಕಾಗದದ ಮೇಲೆ ಬರೆದ ಪತ್ರಗಳು ಕೊಚ್ಚಿ ಮತ್ತು ಪಣಜಿ ಪತ್ರಾಗಾರದಲ್ಲೂ ಮತ್ತು ಕೆಲವು ಪಾಳೆಯಗಾರರ ಮತ್ತು ಜಮೀನ್ದಾರರ ಮನೆಯಲ್ಲೂ ಇವೆ.

ಕಡತದಲ್ಲಿ ಹೆಚ್ಚಿನವು ಕನ್ನಡ ಭಾಷೆಯಲ್ಲಿವೆ. ಕಡತಗಳು ವಿದ್ವಾಂಸರ ಕೃತಿಯಾಗಿರದೇ ಮಠದ ಕರಣಿಕ ಮತ್ತು ಸ್ಥಳೀಯ ಶಾನುಭೋಗರಿಂದ ಕಾಲಕಾಲಕ್ಕೆ ಬರೆಯಲ್ಪಟ್ಟ ದಾಖಲೆಗಳ ಪಟ್ಟಿ. ಆದುದರಿಂದ ಸಾಹಿತ್ಯ ದೃಷ್ಟಿಯಿಂದ ಇವುಗಳ ಮೌಲ್ಯ ಸ್ವಲ್ಪ ಕಡಿಮೆ. ಒಟ್ಟಿನಲ್ಲಿ ನಡೆದ ದೈನಿಕ ಘಟನೆಗಳನ್ನು ಇದ್ದುದನ್ನು ಇದ್ದಂತೆ ಬರೆದಿಟ್ಟಿರುವುದರಿಂದಲೇ ಈ ಕಡತಗಳಿಗೆ ಹೆಚ್ಚಿನ ಐತಿಹಾಸಿಕ ಬೆಲೆ ಇದೆ. ಈ ಕಡತಗಳಲ್ಲಿ ಬರೆಯಲ್ಪಟ್ಟ ಬರಹಗಳು ಹದಿನೇಳರಿಂದ ಹತ್ತೊಂಬತ್ತನೆಯ ಶತಮಾನದ ಆರಂಭದವರೆಗಿನ ಕಾಲದವುಗಳು.

ಪತ್ರದಾಖಲೆಗಳನ್ನು ಪತ್ರಾಗಾರಗಳಲ್ಲಿ ಕ್ರೋಢೀಕರಿಸಿದ್ದಾರೆ. ಕೊಚ್ಚಿ ಪತ್ರಾಗಾರದಲ್ಲಿ ಕನ್ನಡ ದಾಖಲೆಯ ಪತ್ರಗಳನ್ನು ೧೪ ಗಂಟುಗಳಲ್ಲಿ ಕ್ರೋಢೀಕರಿಸಿದ್ದಾರೆ. ಈ ಗಂಟುಗಳಲ್ಲಿ ಕೆಲವು ಪತ್ರಗಳು ದೇವನಾಗರಿ ಲಿಪಿಯಲ್ಲಿವೆ. ಈ ಪತ್ರಗಳಲ್ಲಿ ಸಂವತ್ಸರದ ಹೆಸರಿರುವುದರಿಂದ ಇವುಗಳನ್ನು ಬರೆದ ಕಾಲ ತಿಳಿಯಬಹುದು.

1. ಎ. ಕೆ. ಶಾಸ್ತ್ರಿ : ಶೃಂಗೇರಿ ಧರ್ಮಸಂಸ್ಥಾನ, ಶೃಂಗೇರಿ, ೧೯೮೩, ಪು. ೧೮-೨೩

ಕೆಳದಿ ಅರಸರು ಪೋರ್ತುಗೀಜ ವೈಸರಾಯಗಳಿಗೆ ಬರೆದ ಕನ್ನಡಭಾಷೆಯ ಪತ್ರಗಳು ಪಣಜಿ ಪತ್ರಾಗಾರದಲ್ಲಿವೆ. ಈ ಪತ್ರಗಳನ್ನೆಲ್ಲಾ ಒಂದು ಪೆಟ್ಟಿಗೆಯಲ್ಲಿಟ್ಟಿದ್ದಾರೆ. ಈ ಪತ್ರಗಳು ಕೆಡದಂತೆ ರಾಸಾಯನಿಕ ಪುಡಿಯನ್ನು ಇವುಗಳ ಸುತ್ತ ಪೆಟ್ಟಿಗೆಯೊಳಗೆ ಚೆಲ್ಲಿದ್ದಾರೆ. ಈ ಬರಹದ ಅಂತ್ಯದಲ್ಲಿ 'ಸದಾಶಿವ' ಎಂದಿದೆ. ಈ ಪತ್ರಗಳೆಲ್ಲಾ ಹದಿನೆಂಟನೇ ಶತಮಾನದವುಗಳು.

ಶಿರಾಲಿಯ ಚಿತ್ರಾಪುರ ಮಠದಲ್ಲಿ ಕೆಲವು ಅಪೂರ್ವ ದಾಖಲೆಯ ಪತ್ರಗಳು ಇವೆ. ಕೆಳದಿ ಅರಸರ ಕಾಲದಲ್ಲಿ ಬರೆದ ಅಮೂಲ್ಯ ಪತ್ರಗಳ ಮೂಲಪತ್ರ ನಾಶವಾಗಿ ಅವುಗಳ ಪ್ರತಿ ಇವೆ. ಕಂಪೆನಿ ಸರಕಾರ ಈ ಮಠಕ್ಕೆ ನೀಡಿದ ಕೆಲವು ಸವಲತ್ತು ವಿವರಿಸುವ ದಾಖಲೆಪತ್ರಗಳನ್ನು ಕನ್ನಡಿ ಪೆಟ್ಟಿಗೆಯಲ್ಲಿರಿಸಿದ್ದಾರೆ. ಈ ಪೆಟ್ಟಿಗೆಗಳನ್ನು ಆ ಮಠದ ವಸ್ತುಸಂಗ್ರಹಾಲಯದಲ್ಲಿ ಇದೆ.

ಕನ್ನಡ ಕರಾವಳಿಯಲ್ಲಿ ದಾಖಲೆಪತ್ರಗಳ ಬಳಕೆಯಿದ್ದಿತ್ತೆಂದು ಕಾಯ್ಕಿಣಿಯಲ್ಲಿ ಸಿಕ್ಕಿದ ಶಾಸನ, ತೇದಿ ಕ್ರಿ. ಶ. ೧೫೪೨, ಮಂಜೇಶ್ವರದ ಶಾಸನ (ಕ್ರಿ. ಶ. ೧೫೮೭) ಮತ್ತು ಇನ್ನಿತರ ಶಾಸನಗಳಲ್ಲೂ ಮತ್ತು ಯೂರೋಪಿನಿಂದ ಬಂದ ಪ್ರವಾಸಿ ದೆಲ್ಲವಲ್ಲೆ ಮತ್ತು ಪೀಟರ ಮಂಡಿಯ ವರದಿಗಳು ದೃಢೀಕರಿಸುತ್ತವೆ.[2]

ರಾಜಕೀಯ : ಹದಿನೇಳನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದವರೆಗಿನ ಅವಧಿಯಲ್ಲಿ ಕರ್ನಾಟಕ ಕರಾವಳಿಯಲ್ಲಿ ನಡೆದ ಹಲವಾರು ರಾಜಕೀಯ ಘಟನೆಗಳನ್ನು ಈ ಅಪೂರ್ವ ದಾಖಲೆಪತ್ರಗಳು ತಿಳಿಸುತ್ತವೆ. ಇನ್ನಿತರ ದಾಖಲೆಗಳಲ್ಲಿ ತಿಳಿಸಿದ ರಾಜಕೀಯ ಘಟನೆಗಳ ಸಮಗ್ರ ವಿವರ ಈ ಪತ್ರ ಮತ್ತು ಕಡತಗಳಲ್ಲಿವೆ. ಉದಾಹರಣೆಗಾಗಿ ಬಂಗ, ಕುಂಬಳೆ ಮತ್ತು ವಿಠಲ ಅರಸರ ಹೆಸರು ಮತ್ತು ಅವರ ವಂಶಾವಳಿ ಮತ್ತು ಅವರ ರಾಜ್ಯದ ವಿಸ್ತಾರಗಳನ್ನೆಲ್ಲಾ ಮಂಜೇಶ್ವರ ದೇವಾಲಯದಲ್ಲಿ ಸಿಕ್ಕಿದ ಕೆಲವು ಕಡತಗಳು ತಿಳಿಸಿವೆ. ಇಷ್ಟಲ್ಲದೆ ಕೆಳದಿ ನಾಯಕರಿಗೂ ಮತ್ತು ಮಲಬಾರಿನಲ್ಲಿ ಆಳಿಕೊಂಡಿದ್ದ ಅರಸು ಮನೆತನದವರೊಳಗಾದ ಘರ್ಷಣೆ ಮತ್ತು ಇದರಿಂದ ಕೆಳದಿ ಅರಸರಿಗಾದ ಕಷ್ಟ-ನಷ್ಟಗಳ ಉಲ್ಲೇಖವು ಈ ದೇವಾಲಯದ ಒಂದು ಪತ್ರದಲ್ಲಿದೆ. ಈ ಪತ್ರ ಕ್ರಿ. ಶ. ೧೭೦೬ರ ಇಸವಿಯದು.[3] ಕನ್ನಡ ಕರಾವಳಿಯಲ್ಲಿ ಮರಾಠರು ನಡೆಸಿದ ಆಕ್ರಮಣ ಮತ್ತು ಅದರಿಂದಾದ ಪರಿಣಾಮ ಮತ್ತು ಕೆಳದಿ ನಾಯಕರು ತೋರಿಸಿದ ಪ್ರತಿಕ್ರಿಯೆಗಳ ವಿವರ ನಮಗೆ ತಿಳಿದುಬರುವುದು ಗೋವಾ ಪತ್ರಾಗಾರದಲ್ಲಿರುವ ಕನ್ನಡ ಪತ್ರಗಳಿಂದ. ಮರಾಠರು ಮಿರಜಿ(ಮಿರ್ಜಾನ)ಯಿಂದ ದಕ್ಷಿಣಕ್ಕಿರುವ ಎಲ್ಲಾ ಬಂದರುಗಳನ್ನು ಲೂಟಿ ಮಾಡಿದ್ದರೆಂದೂ ಗೋವೆಯಲ್ಲಿ ಸಿಕ್ಕಿದ ಕ್ರಿ. ಶ. ೧೭೫೬ನೇ ಇಸವಿ ಪತ್ರಗಳಿಂದ ತಿಳಿದು ಬರುತ್ತದೆ. ಇಷ್ಟಲ್ಲದೇ ಹೊನ್ನಾವರ ಮತ್ತು ಕುಂದಾಪುರದ ವರ್ತಕರು ಮರಾಠರಿಗೆ ಅಕ್ಕಿ ವ್ಯಾಪಾರ ಮಾಡಬಾರದಾಗಿ ನಿರ್ಬಂಧಿಸಿದ್ದನ್ನು ಇದೇ ಪತ್ರಗಳು ತಿಳಿಸಿವೆ. ಹೈದರನು ಮಲಬಾರಿನಲ್ಲಿರುವ ನೀಲೇಶ್ವರ, ಚಿರಕಲ್, ಕೊಲತ್ತೇರಿ, ಕಣ್ಣಾನೂರು, ಬಡಗರ ಮತ್ತು ಕಲ್ಲಿಕೋಟೆ ರಾಜರುಗಳ ಮೇಲೆ ನಡೆಸಿದ ಯುದ್ಧ ಮತ್ತು ಒಪ್ಪಂದಗಳ ವಿವರ ಕೊಚ್ಚಿಯಲ್ಲಿರುವ ಪತ್ರಾಗಾರದಿಂದ ತಿಳಿದುಬರುತ್ತದೆ. ನಾಲ್ಕನೆಯ ಗಂಟಿನ ೧೯ನೆಯ ಪತ್ರ ಮಲಬಾರಿನ ರೇವುಗಳಿಗೆ ಮರಾಠರ ಆಕ್ರಮಣ ಭೀತಿಯನ್ನು ತಿಳಿಸಿವೆ.

ಆಡಳಿತ : ರಾಜ್ಯ ಆಡಳಿತ ವಿಭಾಗಗಳಾದ ಹೋಬಳಿ, ಸೀಮೆ, ಮಾಗಣೆ, ಗ್ರಾಮ ಮತ್ತು ಗುತ್ತುಗಳ ಇರುವಿಕೆ ಮತ್ತು ಅವುಗಳೊಳಗಿರುವ ವ್ಯತ್ಯಾಸ ಕೆಲವು ದಾಖಲೆಪತ್ರ ಮತ್ತು ಕಡತ ಅಧ್ಯಯನದಿಂದ ಬೆಳಕಿಗೆ ಬರುತ್ತವೆ. ಚಿತ್ರಾಪುರ ಮಠ ಮತ್ತು ಮಂಜೇಶ್ವರದ ಪತ್ರ ದಾಖಲೆಗಳ ಅಧ್ಯಯನವು ಈ

---

2. ಕರ್ನಾಟಕ ಇನ್‌ಸ್ಕ್ರಿಪ್ಷನ್ಸ್, ೫-೧, ಸಂಖ್ಯೆ ೧೧, ಪು. ೫೧, ಸಾಲು ೧೮ : ಈ ಶಾಸನವು 'ಪಡಿಪ್ರಮಾಣ' ಎಂದು ತಿಳಿಸಿದ್ದು ದಾಖಲೆಪತ್ರಗಳೆಂದು ತಿಳಿಯಲು ಆಸ್ಪದವಿದೆ; ಅನ್ಯುಯಲ್ ರಿಪೋರ್ಟ್ ಆಫ್ ಇಂಡಿಯನ್ ಎಪಿಗ್ರಫಿ, ೧೯೬೯, ಕ್ರಮಾಂಕ A-7; ಎಪಿಗ್ರಾಫಿಯ ಕರ್ನಾಟಿಕಾ, ಸಂ. ೭, ಕೆಪಿ ೪೬; ಡೆಲ್ಲಾವಲ್ಲೆ: ದಿ ಟ್ರಾವೆಲ್ಸ್ ಇನ್ ಇಂಡಿಯಾ, II, ಪು. ೨೫೨-೫೩; ಪೀಟರ್ ಮಂಡಿ : ದಿ ಟ್ರಾವೆಲ್ಸ್ ಇನ್ ಯೂರೋಪ್ ಆಂಡ್ ಏಷ್ಯಾ, III, ಭಾಗ I, ಪು. ೯೮-೯೯.

3. ಗಣಪತಿರಾವ್ ಐಗಳ: ಮಂಜೇಶ್ವರ, ಮಂಗಳೂರು, ೧೯೭೪: ಪರಿಶಿಷ್ಟ-೩೦

ಆಡಳಿತ ವಿಭಾಗಗಳು ಉತ್ತರ ಮತ್ತು ದಕ್ಷಿಣಕನ್ನಡ ಪ್ರದೇಶಗಳಲ್ಲಿ ವಿಭಿನ್ನವಾಗಿ ಉಪಯೋಗಿಸಲ್ಪಟ್ಟಿವೆ ಯೆಂಬ ಅರಿವುಂಟು ಮಾಡುತ್ತವೆ. ಕರಾವಳಿ ಕರ್ನಾಟಕದ ಭೂಕಂದಾಯದ ಸ್ಪಷ್ಟಚಿತ್ರ ತಿಳಿಯಲು ಈ ದಾಖಲೆ ಪತ್ರಗಳು ಬಹಳ ಸಹಾಯ ಮಾಡುತ್ತವೆ. ಭೂಕಂದಾಯ ದೊಂದಿಗೆ ಮುರಗೇಣಿ, ಪಗುದಿ, ವರ್ತನೆ, ಬಿಡಾರ, ಕೋಟೆ ಬಿರಾಡ, ದಾಸೋಹ, ಕಿಸ್ತು, ಇತ್ಯಾದಿ ತೆರಿಗೆ ಗಳನ್ನು ಸರಕಾರ ಆಗಿಂದಾಗ್ಗೆ ಹೇರಿಸುತ್ತಿತ್ತೆಂದು ಮಂಜೇಶ್ವರ ದೇವಾಲಯದ ಕೆಲವು ಕಡತಗಳು ಹೇಳಿವೆ. ಹಲಸನಾಡು ವಿಶ್ವೇಶ್ವರಯ್ಯನವರ ಮನೆಯಲ್ಲಿ ಸಿಕ್ಕಿದ ಕಡತಗಳು ಆಗಿನ ಕರಾವಳಿಯಲ್ಲಿ ಬಳಕೆ ಇರುವ ಸಿದ್ಧಾಯ, ದಾಸೋಹ, ಪಟ್ಟಿಮೊಳಿಸುಂಕಗಳ ಉಲ್ಲೇಖವಿದೆ. ಇಷ್ಟಲ್ಲದೇ ಆಕಸ್ಮಿಕ ದುರಂತಗಳಾದ ಗುಡ್ಡಜರಿತ, ಉಪ್ಪುನೀರು ಹಾದದ್ದು, ಬರೆಗುಂದಿದ್ದು, ಹೊಯ್ಗೆ ಹಾದದ್ದನ್ನು ಈ ಕಡತಗಳು ಹೇಳಿವೆ. ಈ ಆಕಸ್ಮಿಕ ದುರಂತಗಳಲ್ಲಿ ಸರಕಾರ ತೆರಿಗೆ ಮನ್ನಾಮಾಡಿದ್ದನ್ನು ಈ ಕಡತದಲ್ಲೂ ನೋಡಬಹುದು. ಆಡಳಿತ ಅಧಿಕಾರಿ ಗಳಾದ ಸುಭೆದಾರ, ಪಾರುಪತ್ಯಗಾರ, ಕಿಲ್ಲೆದಾರ, ಮಣೆಗಾರ, ಬೊಕ್ಕಸ(ಖಜಾಂಚಿ)ಗಳ ಕರ್ತವ್ಯಗಳ ವಿವರಗಳು ಶೃಂಗೇರಿಯಲ್ಲಿರುವ ಕಡತಗಳಲ್ಲಿವೆ.[4]

ಧಾರ್ಮಿಕ : ಕನ್ನಡ ಕರಾವಳಿಯಲ್ಲಿರುವ ದೇವಾಲಯಗಳಲ್ಲಿ ನಡೆಯುವ ಹಬ್ಬ ಉತ್ಸವ ವಿಶಿಷ್ಟ ಪೂಜೆಗಳ ವಿವರಗಳನ್ನು ಕೆಲವು ದಾಖಲೆ ಪತ್ರಗಳು ತಿಳಿಸಿವೆ. ಉದಾ : ಮಂಜೇಶ್ವರ ದೇವಾಲಯದಲ್ಲಿ ಸಿಕ್ಕಿದ ಶಾ. ಶ. ೧೬೭೯ (ಕ್ರಿ. ಶ. ೧೭೫೮) ಕಡತವು ವಿಠಲ ಪಂಚಲಿಂಗೇಶ್ವರ ದೇವಾಲಯದಲ್ಲಿ ನಡೆಯುವ ಅಯನೋತ್ಸವ. ಚವುತಿ ಹಬ್ಬಗಳಲ್ಲಿ ನಡೆಯುವ ಖರ್ಚಿನ ವಿವರ ತಿಳಿಸಿವೆ.[5] ನಂದಾದೀಪ, ವಸಂತೋತ್ಸವ ರಂಗಪೂಜೆ, ಸೋಣೆ ಆರತಿ, ಸಂಕ್ರಾಂತಿ ಪೂಜೆ, ಅಯ ನೋತ್ಸವ, ನಾಗಪಂಚಮಿ. ನವರಾತ್ರಿಪೂಜೆ ಇತ್ಯಾದಿ ಗಳ ವಿವರ ಕೊಲ್ಲೂರು ಮತ್ತು ಕೋಟೇಶ್ವರ ದೇವಾಲಯ ಗಳಲ್ಲಿ ಸಿಕ್ಕಿದ ಕಡತಗಳಿಂದ ತಿಳಿದುಬರುತ್ತವೆ. ಹಲಸ ನಾಡು ಮತ್ತು ಆ ಊರಿನ ಆಸುಪಾಸಿನಲ್ಲಿರುವ ದೇವಾಲಯಗಳನ್ನು ತಿಳಿಸಿ ಅಲ್ಲಿ ನಡೆಯುವ ಧಾರ್ಮಿಕ ಕಟ್ಟಳೆಗಳು ವಿಶ್ವೇಶ್ವರಯ್ಯನವರ ಮನೆಯಲ್ಲಿರುವ ಕಡತಗಳಿಂದ ತಿಳಿದುಬರುತ್ತವೆ.

ಚಿತ್ರಾಪುರ ಮಠದಲ್ಲಿರುವ ಕ್ರಿ. ಶ. ೧೭೨೦, ೧೭೨೨, ೧೭೩೯ರ ಪತ್ರಗಳು ಸಾರಸ್ವತ ಸಮಾಜದವರು ತಮ್ಮ ಗುರುಗಳನ್ನು ಸ್ವೀಕರಿಸಿದ ರೀತಿ, ಆ ಗುರುಗಳಾದ ಶ್ರೀ ಶಂಕರಾಶ್ರಮ ಸ್ವಾಮಿಗಳು ತಮ್ಮ ಸಮಾಜದವರಿಗೆ ವಿಧಿಸಿದ ಧಾರ್ಮಿಕ ನಿಯಮಾವಳಿ ಮತ್ತು ಕಟ್ಟಳೆಗಳು ಮತ್ತು ಮಠದಲ್ಲಿ ನಡೆಯುವ ಧಾರ್ಮಿಕ ಉತ್ಸವಗಳನ್ನು ಸಾಂಗವಾಗಿ ನಡೆದುಬರಲು ಕೆಳದಿ ಇಮ್ಮಡಿ ಬಸವಪ್ಪ ನಾಯಕನು ಉಳುವರೆ ಗ್ರಾಮದ ಕಂದಾಯ ಉತ್ಪತ್ತಿ ಬಿಟ್ಟ ವಿವರಗಳಿವೆ. ಶೃಂಗೇರಿ ಮಠ ಮತ್ತು ದೇವಾಲಯ ಗಳಲ್ಲಿ ನಡೆಯುವ ಧಾರ್ಮಿಕ ಹೊಂದಾಣಿಕೆಯನ್ನು ಶೃಂಗೇರಿ ಮಠದ ಕೆಲವು ಕಡತಗಳು ತಿಳಿಸಿವೆ. ಉದಾ : ಪೇಜಾವರ ಮಠದ ಶ್ರೀಮದ್ ತೀರ್ಥ ಶ್ರೀಪಾದಂಗಳು ಶಾ. ಶ. ೧೬೬೩ರ ಪ್ಲವ ಸಂವತ್ಸರದಲ್ಲಿ (ಕ್ರಿ. ಶ. ೧೭೪೧) ಗಂಧ, ಪ್ರಸಾದ ಮತ್ತು ಮಂತ್ರಾಕ್ಷತೆ ಸ್ವೀಕರಿಸುವಂತೆ ಶೃಂಗೇರಿಯ ಸುಭೇದಾರ ಪುಟ್ಟರಾಯರಿಗೆ ಪತ್ರಬರೆದರು. ಇಷ್ಟಲ್ಲದೇ ಮರುವರ್ಷ ಉಡುಪಿ ಶ್ರೀ ಕೃಷ್ಣನ ಪೂಜಾ ಪರ್ಯಾ ಯಕ್ಕೆ ಶೃಂಗೇರಿ ಜಗದ್ಗುರುಗಳು (ನರಸಿಂಹ ಭಾರತಿ VIII) ಬರುವ ಏರ್ಪಾಡು ಮಾಡಬೇಕಾಗಿ ಪೇಜಾವರ ಸ್ವಾಮಿಗಳು ಪುಟ್ಟರಾಯನಿಗೆ ವಿನಂತಿಸಿಕೊಂಡರು. ಇದರಂತೆ ಶೃಂಗೇರಿ ಸ್ವಾಮಿಗಳು ಪರ್ಯಾಯ ಉತ್ಸವಕ್ಕೆ ಬಂದಿದ್ದರು.[6]

ಕೊಚ್ಚಿ ಪತ್ರಾಗಾರದಲ್ಲಿರುವ ಕನ್ನಡ ದಾಖಲೆಪತ್ರ ಗಳು ಕೊಚ್ಚಿ ರಾಜ ಮತ್ತು ಕನ್ನಡ ಕರಾವಳಿಯ ದೇವ ಸ್ಥಾನಗಳ ಧಾರ್ಮಿಕ ಸಂಬಂಧವನ್ನೊಳಗೊಂಡಿವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಕೊಲ್ಲೂರು ಮೂಕಾಂಬಿಕಾ ದೇವಾಲಯಕ್ಕೆ ಕೊಚ್ಚಿ, ಚಿರಕಲ, ಕೊಲಸ್ವೇರಿ ರಾಜರು

4. ಶೃಂಗೇರಿ ಧರ್ಮಸಂಸ್ಥಾನ, ಪು. ೯೯-೧೧೦
5. ಮಂಜೇಶ್ವರ : ಪರಿಶಿಷ್ಟ-೩೦
6. ಶೃಂಗೇರಿ ಧರ್ಮಸಂಸ್ಥಾನ, ಪು.೧೩೯-೪೦

ಗಳು ಭಕ್ತಿಪೂರ್ವಕವಾಗಿ ಬಿಟ್ಟ ಉಂಬಳಿ ಮತ್ತು ಇನ್ನಿತರ ಸೇವೆಗಳನ್ನು ಹದಿನಾಲ್ಕು ಗಂಟುಗಳ ಕೆಲವು ಪತ್ರಗಳು ವಿವರಿಸಿವೆ. ಚಿತ್ತಾರಿಯಲ್ಲಿ ಕಟ್ಟಿದ ಅಗ್ರಹಾರ, ಅದಕ್ಕೆ ಕೊಚ್ಚಿಯ ರಾಜ ಉಂಬಳಿ ಬಿಟ್ಟ ವಿವರ ಆರನೇ ಗಂಟಿನ ಮೂರನೇ ನಂಬ್ರದ ಪತ್ರ ತಿಳಿಸುತ್ತದೆ. ಇಷ್ಟಲ್ಲದೆ ಕೊಚ್ಚಿಯ ಅರಸರು ಉಡುಪಿ ಶ್ರೀಕೃಷ್ಣ ಮಠದೊಂದಿಗೆ ನಿಕಟ ಧಾರ್ಮಿಕ ಸಂಬಂಧ ಇಟ್ಟುಕೊಂಡಿದ್ದರೆಂಬ ಸತ್ಯವು ತಿಳಿದು ಬರುವುದು ಆರನೇ ಗಂಟಿನ ಕೆಲವು ಪತ್ರಗಳ ಅಧ್ಯಯನದಿಂದ ಗೋಚರವಾಗುತ್ತದೆ. ಉದಾ : ಕೊಚ್ಚಿ ರಾಜ್ಯದ ದಿವಾನ ನಂಜಪ್ಪಯ್ಯ ಪಲಿಮಾರು ಮಠದ ಸ್ವಾಮಿಗಳ ಶಿಷ್ಯರು. ದಿವಾನರು ತಿರುಪತಿ ಮತ್ತು ಶ್ರೀರಂಗಗಳಂಥ ಪವಿತ್ರ ಸ್ಥಳಕ್ಕೆ ರಾಜನೊಂದಿಗೆ ಯಾತ್ರೆಗೈದ ನಂತರ ಉಡುಪಿಗೆ ಬಂದು ಶ್ರೀಕೃಷ್ಣನಿಗೆ ವಿಶೇಷ ಪೂಜೆ ಸಲ್ಲಿಸಿ ಕಾಣಿಕೆ ನೀಡಿದರೆಂಬ ವಿಷಯ ೬ನೇ ಗಂಟಿನ ವಿಷು ಸಂವತ್ಸರ ೬ನೇ ನಂಬ್ರದ ದಾಖಲೆಯು ಉಲ್ಲೇಖಿಸಿದೆ.[7]

ಸಾಮಾಜಿಕ : ಕಡತಗಳಲ್ಲಿ ಬರೆದ ಬಿನ್ನವತ್ತಳೆ ಮತ್ತು ನಿರೂಪಗಳು ಕರಾವಳಿ ಕರ್ನಾಟಕದ ಸಾಮಾಜಿಕ ಸ್ಥಿತಿಯನ್ನು ತಿಳಿಯಲು ಸಹಾಯಕವಾಗಿವೆ. ಮೇಲು ಕೀಳು ಆಧಾರದ ಮೇಲೆ ವರ್ಗೀಕರಿಸಿದ ಜಾತಿಪದ್ಧತಿ ಸಮಾಜದ ದೈನಂದಿನ ವ್ಯವಹಾರ, ಮಹಿಳೆಯರ ಸ್ಥಾನ, ಗುಲಾಮಪದ್ಧತಿ, ಜಾತಿಕಲಹ ಮತ್ತು ಅವುಗಳ ನಿವಾರಣೆ, ಜಾತಿಪದ್ಧತಿಗಳನ್ನು ಉಲ್ಲಂಘಿಸುವವರಿಗಾಗುವ ಶಿಕ್ಷೆಗಳ ವಿವರ ಇತ್ಯಾದಿಗಳನ್ನು ದಾಖಲೆಪತ್ರ ಮತ್ತು ಕಡತಗಳು ಒಳಗೊಂಡಿವೆ. ಹಲವಾರು ಜಾತಿಯ ಜನರು ಕೂಡಿಬಾಳಿದ್ದರೂ ಒಮ್ಮೊಮ್ಮೆ ಕೋಮುವಾರು ಗಲಭೆಗಳು ಉಂಟಾಗುತ್ತಿದ್ದವು. ಅಂತಹ ಕಲಹಗಳನ್ನು ಧರ್ಮಾಧಿಕಾರಿಗಳು ಬಗೆಹರಿಸುತ್ತಿದ್ದರೆಂದು ಶೃಂಗೇರಿಯ ಕೆಲವು ಕಡತಗಳ ಅಧ್ಯಯನದಿಂದ ತಿಳಿದುಬರುತ್ತದೆ. ಉದಾ : ಜನಿವಾರ ತೊಡಲು ಕ್ಷತ್ರಿಯವರ್ಗದ ಸೇರೆಗಾರರು ಅರ್ಹರೋ ಅಥವಾ ಅನರ್ಹರೋ ಎಂಬ ವಿವಾದ ಕೊಂಕಣಸ್ಥರಿಗೂ ಸೇರೆಗಾರರಿಗೂ ನಡುವೆ ಬಂದದ್ದಕ್ಕಾಗಿ ಕ್ರಿ. ಶ. ೧೬೩೩ರಲ್ಲಿ ಮಂಗಳೂರು, ಬಾರಕೂರು, ಗೇರಸೊಪ್ಪೆ, ಚಂದಾವರ ಮಿಡ್ಜಿಯ ಈ ಜಾತಿಯವರು ಶಂಕರಭಾರತಿ ಸ್ವಾಮಿಗಳಲ್ಲಿ (ಸಚ್ಚಿದಾನಂದಭಾರತೀ ಗುರುಗಳು) ನಿವಾರಿಸಿಕೊಂಡರು. ಈ ಎಲ್ಲಾ ಪ್ರಜೆಗಳಿಗೆ ಕೆಳದಿ ಭದ್ರಪ್ಪನಾಯಕ (ಆ ಕಾಲದಲ್ಲಿ ಕೆಳದಿ ಅರಸ ವೀರಭದ್ರ) ಅರಸನಾಗಿದ್ದರಿಂದ ಈ ಸಂಗತಿ ಅವನ ಗಮನಕ್ಕೆ ತರಲಾಯಿತು. ಈ ವಿಷಯ ಸಾಮಾಜಿಕ ಮತ್ತು ಧಾರ್ಮಿಕ ಸಮಸ್ಯೆಯಾದ್ದರಿಂದ ಇದನ್ನು ಬಗೆಹರಿಸಲು ಶೃಂಗೇರಿ ಗುರುಗಳು ಸಮರ್ಥರು ಎಂದು ನಾಯಕನು ಸೇರೆಗಾರರಿಗೆ ಆಣತಿಯಿತ್ತ. ಈ ನಾಯಕನ ಇಚ್ಛೆಯಂತೆ ಸೇರೆಗಾರರು ಶೃಂಗೇರಿ ಗುರುಗಳನ್ನು ಕಂಡು ತಮಗೆ ಜನಿವಾರ ತೊಡಲು ಅಪ್ಪಣೆ ಕೊಡಬೇಕೆಂದು ಪ್ರಾರ್ಥಿಸಿಕೊಂಡರು. ಶೃಂಗೇರಿ ಗುರುಗಳು ಅವರಿಗೆ ಜನಿವಾರ ತೊಡಲು ಅನುಮತಿ ನೀಡಿದ್ದರೆಂಬ ವಿಚಾರ ಈ ಕಡತದ ಅಧ್ಯಯನದಿಂದ ತಿಳಿದುಬರುತ್ತದೆ.[8]

ಕೆಳವರ್ಗದ ಜನರನ್ನು ಸಂಬಳಕೊಟ್ಟು ಕೃಷಿ ಮತ್ತು ಮನೆಕೆಲಸಗಳಿಗೆ ಮೇಲುವರ್ಗದ ಜಮೀನುದಾರರು ನೇಮಿಸಿಕೊಳ್ಳುತ್ತಿದ್ದರೆಂದು ಕನ್ನಡ ಕರಾವಳಿಯಲ್ಲಿ ಸಿಕ್ಕಿದ ಕೆಲವು ಕಡತಗಳು ತಿಳಿಸಿವೆ. ಹಲಸನಾಡಿನಲ್ಲಿ ಸಿಕ್ಕಿದ ಕಡತ ಆಳುಗಳ ವೆಚ್ಚವನ್ನು ತಿಳಿಸಿದರೆ, ಶೃಂಗೇರಿಯ ಕಡತದಲ್ಲಿ ಚೆನ್ನಬಸವನ ಮಗ ಸಂಜ ಮತ್ತು ರುದ್ರಮನ ಮಗ ವೀರ ಇವರಿಗೆ ಶೃಂಗೇರಿ ಮಠದಲ್ಲಿ ದಾಸ್ಯವೃತ್ತಿಯ ಸೇವೆ ಸಲ್ಲಿಸಿದ್ದಕ್ಕೆ ಸಂಬಳ ಕೊಟ್ಟದ್ದನ್ನು ತಿಳಿಸಿದೆ.[9]

---

7. ಕೆ. ಜಿ. ವಸಂತಮಾಧವ : 'ಕನ್ನಡ ಪೇಪರ್ಸ್ ಇನ್ ಕೋಚಿನ್ ಆರ್ಕೈವ್ಸ್', ಇಂಡಿಯನ್ ಆರ್ಕೈವ್ಸ್, XXVII, ಸಂ. ೨, ಜುಲೈ-ಡಿಸೆಂಬರ್ ೧೯೭೮, ನ್ಯೂ ದೆಹಲಿ, ಪು. ೩೫-೩೬

8. ಶೃಂಗೇರಿ ಧರ್ಮಸಂಸ್ಥಾನ, ಪು. ೧೭೮ : ಈ ಕಡತದಲ್ಲಿ ತಿಳಿಸಿದ ಶೃಂಗೇರಿ ಗುರುಗಳು ಮತ್ತು ಕೆಳದಿ ಅರಸರ ಉಲ್ಲೇಖಗಳು ತಪ್ಪಾಗಿವೆ. ಆದರೆ ಸಾಮಾಜಿಕ ಮತ್ತು ಧಾರ್ಮಿಕ ಪರಿಸ್ಥಿತಿಯನ್ನರಿಯಲು ಇದೊಂದು ಮಹತ್ವದ ದಾಖಲೆಯೆಂದು ಇಲ್ಲಿ ತಿಳಿಯಬೇಕು.

9. ಅದೇ, ಪು. ೧೮೦

ಕನ್ನಡ ಕರಾವಳಿಯ ಕೆಳಜಾತಿಯ ಮುಹಿಳೆಯರು ದಾಸ್ಯವೃತ್ತಿಯಲ್ಲಿದ್ದರೆಂದೂ ಅವರ ವಿಕ್ರಯವಾಗುತ್ತಿದ್ದವೆಂದೂ ಹಲವಾರು ದಾಖಲೆ ಪತ್ರ ಮತ್ತು ಕಡತಗಳು ತಿಳಿಸಿವೆ. ಇಷ್ಟಲ್ಲದೇ ನಿರ್ಗತಿಕ ಬಡ ಹೆಂಗಸರು ಮತ್ತು ಹೊಲೆಯರ ವಿಕ್ರಯವು ಆಗುತ್ತಿತ್ತೆಂದೂ ಈ ಕಡತಗಳು ತಿಳಿಸಿವೆ.10 ಈ ಹೊಲೆಯಾಳುಗಳನ್ನು ಹುಟ್ಟಾಳು, ಮೂಲದಾಳು ಮತ್ತು ಮಣ್ಣಾಳುಗಳೆಂದು ವರ್ಗೀಕರಿಸಿ ಅವರಿಗೆ ನೀಡುತ್ತಿದ್ದ ಸವಲತ್ತುಗಳ ವಿವರ ಹಲಸನಾಡಿನಲ್ಲಿ ಸಿಕ್ಕಿದ ಕಡತಗಳು ತಿಳಿಸಿವೆ. ಒಟ್ಟಿನಲ್ಲಿ ಸಹಬಾಳ್ವೆಯ ನಂಬಿಕೊಂಡು ಬಂದ ಸಾಂಪ್ರದಾಯಿಕ ಪಾಳೆಯಗಾರ ಪದ್ಧತಿಯ ಸಮಾಜ ಕನ್ನಡ ಕರಾವಳಿಯಲ್ಲಿದ್ದಿತೆಂದು ಕಡತಗಳ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಆರ್ಥಿಕ ಸ್ಥಿತಿ : ಕನ್ನಡ ಕರಾವಳಿಯಲ್ಲಿ ಬಳಕೆ ಇರುವ ಬೇಸಾಯಕ್ರಮ ಇಲ್ಲಿನ ಬೇಸಾಯ ಭೂಮಿಗಳ ವರ್ಗೀಕರಣ ಅರಣ್ಯಸಂಪತ್ತು, ಭೂವ್ಯವಹಾರ, ಗುತ್ತಿಗೆ ಪದ್ಧತಿ, ನಾಣ್ಯ ಚಲಾವಣೆ ಮತ್ತು ಅಳತೆ ತೂಕಗಳ ವಿವರಗಳನ್ನೆಲ್ಲಾ ದಾಖಲೆಪತ್ರ ಮತ್ತು ಕಡತಗಳು ಬಣ್ಣಿಸುತ್ತಾ ಬಂದಿವೆ. ಮಂಜೇಶ್ವರ ಮತ್ತು ಕೊಲ್ಲೂರು ದೇವಾಲಯಗಳಲ್ಲಿ ಸಿಕ್ಕಿದ ಕಡತಗಳಲ್ಲಿ ಅಕ್ಕಿ, ಮೆಣಸು, ಕೊಬರಿ, ಕಬ್ಬಿನಬೆಲ್ಲ, ಗಂಧ, ಗಡಸಿನ ಸರಕುಗಳೆಂದು ತಿಳಿಸಿ ಅವುಗಳ ಮೇಲೆ ಸುಂಕ ವಿಧಿಸಿದನ್ನು ತಿಳಿಸಿವೆ.

ಬೇಸಾಯ ಭೂಮಿಗಳು, ಅವುಗಳ ಬೆಳೆಯನ್ನು ಹೊಂದಿಕೊಂಡು ವರ್ಗೀಕರಿಸಿದ ವಿವರಗಳು ಹಲಸನಾಡು, ಮಂಜೇಶ್ವರದ ಶ್ರೀಮದನಂತೇಶ್ವರ ದೇವಾಲಯಗಳ ಕಡತಗಳಲ್ಲಿ ನಮೂದಿಸಲಾಗಿದೆ. ಇಷ್ಟಲ್ಲದೆ ಈ ಭೂಮಿಗಳಲ್ಲಿ ನಡೆಯುವ ಭೂಹಿಡುವಳಿ ಕ್ರಮಗಳಾದ ಗೇಣಿ ಪದ್ಧತಿಗಳ ವಿವರ ಈ ಕಡತಗಳಲ್ಲಿ ತಿಳಿಸಿದೆ. ಅತಿವೃಷ್ಟಿ ಮತ್ತು ಅನಾವೃಷ್ಟಿಯಲ್ಲಿ ಧಾರ್ಮಿಕ ಸಂಸ್ಥೆಗಳು ಮತ್ತು ಕೆಲವು ಭೂಮಾಲಿಕರು ತಮ್ಮ ಗೇಣಿ ನೀಡುತ್ತಿದ್ದ ಒಕ್ಕಲುಗಳಿಗೆ ರಿಯಾಯತಿ ತೋರಿಸಿದ್ದನ್ನು ಕೆಲವು ಕಡತಗಳು ತಿಳಿಸಿವೆ. ಇದಕ್ಕೆ ನಿದರ್ಶನವಾಗಿ ಶಾ.ಶ. ೧೫೭೭ (ಕ್ರಿ.ಶ. ೧೬೫೫) ರಲ್ಲಿ ಕಾಸರಗೋಡು ಮತ್ತು ವ್ರಸ್ತೂರಿನ ಕೆಲವು ಪ್ರದೇಶಗಳು ಅನಾವೃಷ್ಟಿಗೆ ತುತ್ತಾದವು. ಇದರಿಂದ ಪೆರ್ಣಮೊಗರಿನ ಕೆಲವು ಗದ್ದೆಗಳು ನೀರಿನಲ್ಲಿ ಮುಳುಗಿ ನಾಲ್ಕು ವರಹಗದ್ಯಾಣ ಬೆಲೆ ಬರುವ ಪ್ರದೇಶಗಳ ಬೆಳೆ ನಷ್ಟವಾಯಿತು. ಇದನ್ನು ತಿಳಿದ ವಿಠಲ ನರಸಿಂಹದೊಂಬ ಹೆಗ್ಗಡೆ ತಿಮ್ಮಾಜಿಗೆ ವಿನಾಯತಿ ಬಿಟ್ಟದ್ದನ್ನು ಐಗಳು ಸಂಶೋಧಿಸಿದ ಮಂಜೇಶ್ವರದ ದಾಖಲೆಯಿಂದ ತಿಳಿದು ಬರುತ್ತದೆ.

ಕೃಷಿಕ್ರಮದೊಂದಿಗೆ ದಾಖಲೆಪತ್ರಗಳು ಕರ್ನಾಟಕ ಕರಾವಳಿಯ ರೇವುಗಳಾದ ಕಾಸರಗೋಡು, ಕುಂಬಳೆ, ಮಂಜೇಶ್ವರ, ಮಂಗಳೂರು, ಮೂಲ್ಕಿ, ಬಸ್ರೂರು, ಭಟ್ಕಳ, ಹೊನ್ನಾವರ, ಮಿರ್ಜಿ ಮತ್ತು ಕಾರವಾರಗಳಲ್ಲಿ ಕಾರ್ಯನಿರತರಾದ ಜನರ ಜಾತಿ ವರ್ಗೀಕರಣ ಮತ್ತು ಅವರ ವ್ಯಾಪಾರದ ವಸ್ತುಗಳು ಮತ್ತು ಅವರ ವ್ಯಾಪಾರ ವಿವರಗಳನ್ನು ಮಂಜೇಶ್ವರದ ದೇವಾಲಯದ ಕ್ರಿ. ಶ. ೧೭೧೫ರ ದಾಖಲೆಗಳಲ್ಲಿ ತಿಳಿಸಲಾಗಿದೆ. ಮಾಪಿಳ್ಳೆ ಮತ್ತು ಗೌಡ ಸಾರಸ್ವತರು ಕರಾವಳಿ ಕರ್ನಾಟಕದ ವ್ಯಾಪಾರದಲ್ಲಿ ತೀವ್ರ ಆಸಕ್ತಿಯನ್ನು ಹೊಂದಿದ್ದರು. ಇವರಲ್ಲಿ ದೊಡ್ಡ ಮಂದಿಗಳಿದ್ದವೆಂದೂ ಪಣಜಿ ಮತ್ತು ಕೊಚ್ಚಿಯಲ್ಲಿರುವ ದಾಖಲೆಪತ್ರಗಳಿಂದ ತಿಳಿದು ಬರುತ್ತದೆ.

ಕರಾವಳಿ ಕರ್ನಾಟಕದಲ್ಲಿ ಚಲಾವಣೆಯಲ್ಲಿದ್ದ ನಾಣ್ಯ ಪದ್ಧತಿಗಳಾದ ವರಹಗದ್ಯಾಣ, ಹೊನ್ನು, ಧರಣ, ಹಣ, ಮುಪ್ಪಾಗ. ಅಡ್ಡ, ಹಾಗ, ಬೇಳೆ. ವೀಸ, ಅರೆವಿಸ, ಕಾಸುಗಳೆಂಬ ನಾಣ್ಯಗಳು ಅವರೋಹಣ ರೀತಿಯಲ್ಲಿ ಬಳಕೆಯಲ್ಲಿದ್ದವೆಯೆಂದು ವೇದ್ಯವಾಗುತ್ತದೆ. ಒಟ್ಟಿನಲ್ಲಿ ಇಲ್ಲಿನ ಆರ್ಥಿಕ ಸ್ಥಿತಿ ಸಮಾಧಾನಕರವಾಗಿತ್ತು ಜನರ ಬೇಡಿಕೆಗಳು ಕಡಿಮೆಯಿದ್ದುದರಿಂದ ಅವರು ಮಾಡುತ್ತಿದ್ದ ಉದ್ಯೋಗಗಳಿಂದ ಜೀವನ ನಿರ್ವಹಿಸಲು ಸಾಕಾಗುವಷ್ಟು ಆದಾಯ ಬರುತ್ತಿತ್ತು ಎಂಬ ವಿಚಾರಗಳು ಈ ಈ ದಾಖಲೆ ಮತ್ತು ಕಡತಗಳ ಅಧ್ಯಯನದಿಂದ ಬೆಳಕಿಗೆ ಬಂದಿವೆ.

ಉಪಸಂಹಾರ : ಈ ಅಪೂರ್ವ ದಾಖಲೆಯಾದ, ಪತ್ರ ಮತ್ತು ಕಡತಗಳು ಕರಾವಳಿ ಕರ್ನಾಟಕದ ಸಮಗ್ರ ಇತಿಹಾಸ ಅಧ್ಯಯನಕ್ಕೆ ಪ್ರಮುಖ ಆಕರಗಳಾಗಿವೆ. ಇವುಗಳು ಹಲವಾರು ಕುತೂಹಲ ಐತಿಹಾಸಿಕ ವಿಷಯಗಳನ್ನು ತಿಳಿಸುತ್ತವೆ. ಇವುಗಳ ಕ್ರೋಢೀಕರಣ ಮತ್ತು ವಿಮರ್ಶಾತ್ಮಕ ಆಳ ಅಧ್ಯಯನ ನಡೆಸುವ ಆವಶ್ಯಕತೆ ಇದೆ.

10. ಅದೇ, ಪು. ೧೮೨-೮೮